# ಕ್ರಿಯಾಶೀಲ

## ಅಭಿನಂದನ ಸಮಾರಂಭ

ತಾ|| 26-10-1997

ಶ್ರೀ ಕೊಂಡಜ್ಜಿ ಷಣ್ಮುಖಪ್ಪ ಅಭಿನಂದನ ಸಮಿತಿ
ಬೆಂಗಳೂರು

# ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಅವರ ಅಭಿನಂದನ ಸಮಾರಂಭ

## ಒಂದು ವರದಿ

ಕರ್ನಾಟಕದ ಸಾರ್ವಜನಿಕ ಸೇವಾಕ್ಷೇತ್ರಕ್ಕೆ ಮೌಲಿಕ ಕೊಡುಗೆ ನೀಡಿರುವ ಶ್ರೀ ಕೊಂಡಜ್ಜಿ ಬಸಪ್ಪ ಷಣ್ಮುಖಪ್ಪ ಅವರನ್ನು ನಾಡಿನ ಅಭಿಮಾನಿಗಳು ಕೂಡಿಕೊಂಡು ದಿನಾಂಕ 26-10-1997ರಂದು ಬೆಂಗಳೂರು ರವೀಂದ್ರ ಕಲಾಕ್ಷೇತ್ರದಲ್ಲಿ ನಡೆದ ರಾಜ್ಯಮಟ್ಟದ ಸಮಾರಂಭದಲ್ಲಿ ಆತ್ಮೀಯ ಅಭಿನಂದನೆ ಸಲ್ಲಿಸಿದರು.

ಅಂದು ಬೆಳಿಗ್ಗೆ 10-30ಕ್ಕೆ ಸರಿಯಾಗಿ ಆರಂಭವಾದ ಅಭಿನಂದನ ಸಮಾರಂಭದ ನೇತೃತ್ವವನ್ನು ಶ್ರೀ ತರಳಬಾಳು ಜಗದ್ಗುರು ಡಾ|| ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ಮತ್ತು ಶ್ರೀ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ವಹಿಸಿದ್ದರು.

ಕನ್ನಡದ ಪ್ರಸಿದ್ಧ ಗಾಯಕಿ ಶ್ರೀಮತಿ ಕಸ್ತೂರಿ ಶಂಕರ್ ಅವರ ಪ್ರಾರ್ಥನೆಯೊಂದಿಗೆ ಆರಂಭವಾದ ಸಭೆಗೆ ಅಭಿನಂದನಾ ಸಮಿತಿ ಗೌರವಾಧ್ಯಕ್ಷರಾದ ಶ್ರೀ ಕೆ. ಎಂ. ನಂಜಪ್ಪ ಅವರು ಸ್ವಾಗತ ಬಯಸಿದರು. ಸಮಿತಿಯ ಪ್ರಧಾನ ಕಾರ್ಯದರ್ಶಿ ಶ್ರೀ ಎನ್. ಚಂದ್ರಶೇಖರ್ ಅವರು ಸಮಾರಂಭಕ್ಕೆ ಯಶಸ್ಸು ಕೋರಿ ರಾಷ್ಟ್ರದ ನಾನಾ ಭಾಗಗಳಿಂದ ಬಂದಿದ್ದ ಪ್ರಮುಖ ಸಂದೇಶಗಳನ್ನು ಓದಿದರು.

ಕರ್ನಾಟಕ ರಾಜ್ಯದ ಸಾರಿಗೆ ಸಚಿವ ಶ್ರೀ ಪಿ. ಜಿ. ಆರ್. ಸಿಂಧ್ಯ ಅವರು ಅಭಿನಂದನ ಸಮಾರಂಭದ ನೆನಪಿಗೆ ಹೊರತಂದ ''ಕ್ರಿಯಾಶೀಲ'' ಅಭಿನಂದನ ಸಂಚಿಕೆಯನ್ನು ಬಿಡುಗಡೆಮಾಡಿ ಶ್ರೀ ಕೆ. ಬಿ. ಷಣ್ಮುಖಪ್ಪನವರ ಪ್ರಾಮಾಣಿಕ ಸೇವೆಯನ್ನು ಪ್ರಶಂಸಿಸಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಆಯುಕ್ತರಾಗಿದ್ದ ಶ್ರೀ ವಿ. ಪಿ. ದೀನದಯಾಳು ನಾಯುಡು, ಬೆಂಗಳೂರು ಮಹಾನಗರಪಾಲಿಕೆಯ ನಿವೃತ್ತ ಆಡಳಿತಾಧಿಕಾರಿಗಳಾದ ಶ್ರೀ ಎನ್. ಲಕ್ಷ್ಮಣರಾವ್, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಹಿಂದಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ ಮತ್ತು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಎಂ. ಕೋಟೋಜಿರಾವ್ ಅವರು ಅಭಿನಂದನ ಭಾಷಣ ಮಾಡಿ, ಶ್ರೀ ಷಣ್ಮುಖಪ್ಪನವರ ಬಹುಮುಖ ಪ್ರತಿಭೆಗೆ ತಮ್ಮ ಹಾರ್ದಿಕ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ಅಭಿನಂದನ ಸಂಚಿಕೆ ಸಮಿತಿ ಅಧ್ಯಕ್ಷರೂ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆದ ಶ್ರೀ ಗೊ. ರು. ಚೆನ್ನಬಸಪ್ಪನವರು ಶ್ರೀ ಕೆ. ಬಿ. ಷಣ್ಮುಖಪ್ಪನವರಿಗೆ ವಿಶೇಷವಾಗಿ ರಚಿಸಲ್ಪಟ್ಟಿದ್ದ ಅಭಿನಂದನ ಪತ್ರ ಅರ್ಪಿಸಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕರ್ನಾಟಕ ಶಾಖೆಯ ಪರವಾಗಿ ರಾಜ್ಯ ಸ್ಕೌಟ್ಸ್ ಕಮಿಷನರ್ ಶ್ರೀ ಸಿ. ಆರ್. ಮಹಮ್ಮದ್ ಜಾಹಿರುದ್ದೀನ್ ಮತ್ತು ಗೈಡ್ಸ್ ಕಮಿಷನರ್ ಶ್ರೀಮತಿ ಲಲಿತಾ ಕೃಷ್ಣಸ್ವಾಮಿ ಅವರು ಶ್ರೀ ಷಣ್ಮುಖಪ್ಪನವರಿಗೆ ಅಭಿಮಾನದ ನೆನಪಿನ ಕಾಣಿಕೆಯಿತ್ತು ಗೌರವಿಸಿದರು.

ಕಲಾತ್ಮಕ ಅಭಿನಂದನ ನೆನಪಿನ ಕಾಣಿಕೆಯ ಜೊತೆಗೆ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯ ಪ್ರಗತಿಗಾಗಿ ಸಲ್ಲಿಸಿರುವ ಅಮೂಲ್ಯ ಸೇವೆಗೆ ಕೃತಜ್ಞತೆಯ ಕಾಣಿಕೆಯಾಗಿ ಮೂರು ಲಕ್ಷ ರೂ.ಗಳ ಚೆಕ್ಕನ್ನು ಅಭಿನಂದನ ಸಮಿತಿಯ ಪರವಾಗಿ ನೀಡಿದ ಗೌರವಾಧ್ಯಕ್ಷ ಶ್ರೀ ಕೆ. ಎಂ. ನಂಜಪ್ಪನವರು ಮತ್ತು ಅಧ್ಯಕ್ಷ ಶ್ರೀ ವಿ. ಪಿ. ದೀನದಯಾಳು ನಾಯುಡು ಅವರು ಷಣ್ಮುಖಪ್ಪ ದಂಪತಿಗಳಿಗೆ ಶಾಲು ಹೊದಿಸಿ ಗೌರವಿಸಿದರು.

ಅಭಿನಂದನೆ ಸ್ವೀಕರಿಸಿದ ಶ್ರೀ ಕೆ. ಬಿ. ಷಣ್ಮುಖಪ್ಪನವರು ನಾಡಿನ ಜನತೆ ತೋರಿದ ಅಭಿಮಾನಕ್ಕೆ ಕೃತಜ್ಞತೆ ವ್ಯಕ್ತಪಡಿಸಿ ತಮಗೆ ನೀಡಿದ ಕಾಣಿಕೆಯನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಒಂದು ಸೇವಾನಿಧಿಯಾಗಿ ಬಳಸಿಕೊಳ್ಳಬೇಕೆಂದು ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಧ್ಯಕ್ಷರಾದ ರಾಜ್ಯದ ಮುಖ್ಯಮಂತ್ರಿ ಶ್ರೀ ಜೆ. ಹೆಚ್. ಪಟೇಲ್ ಅವರಿಗೆ ಅರ್ಪಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮುಖ್ಯಮಂತ್ರಿ ಶ್ರೀ ಜೆ. ಹೆಚ್. ಪಟೇಲ್ ಅವರು ಶ್ರೀ ಷಣ್ಮುಖಪ್ಪನವರ ತಂದೆ ಲಿಂ|| ಕೊಂಡಜ್ಜಿ ಬಸಪ್ಪನವರು ನಾಡಿಗೆ ಸಲ್ಲಿಸಿದ ಸೇವೆಯನ್ನು ಸ್ಮರಿಸಿ ಶ್ರೀ ಷಣ್ಮುಖಪ್ಪನವರು ತಮ್ಮ ತಂದೆಯ ಸಾತ್ವಿಕ ಸೇವಾ ಪರಂಪರೆಯನ್ನು ಮುಂದುವರೆಸಿಕೊಂಡು ಬರುತ್ತಿರುವುದು ಅಭಿನಂದನೀಯವೆಂದು ತಿಳಿಸಿದರಲ್ಲದೆ, ಅಭಿನಂದಿತರಿಗೆ ಉಜ್ವಲ ಭವಿಷ್ಯ ಹಾರೈಸಿದರು.

ಸಾನಿಧ್ಯ ವಹಿಸಿದ್ದ ಜಗದ್ಗುರುಗಳಿಬ್ಬರೂ ಆಶೀರ್ವಚನ ನೀಡಿ, ಶ್ರೀ ಷಣ್ಮುಖಪ್ಪನವರ ಕ್ರಿಯಾಶೀಲತೆ ಮತ್ತು ಅರ್ಪಣಾಭಾವಗಳನ್ನು ಕೊಂಡಾಡಿ ಸಾರ್ವಜನಿಕ ಕ್ಷೇತ್ರಕ್ಕೆ ಇಂತಹ ಪ್ರಾಮಾಣಿಕರ ಅಗತ್ಯ ಬಹಳವಿದೆ ಎಂದರು. ಸಮಾರಂಭದ ಅಂಗವಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ನಾನಾ ಘಟಕಗಳ ಮಕ್ಕಳಿಂದ ಸಂದರ್ಭಕ್ಕೆ ಸೂಕ್ತವಾದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.

ರವೀಂದ್ರ ಕಲಾಕ್ಷೇತ್ರದಲ್ಲಿ ಕಿಕ್ಕಿರಿದು ತುಂಬಿದ್ದ, ನಾಡಿನ ನಾನಾ ಭಾಗಗಳಿಂದ ಬಂದಿದ್ದ ಅಭಿಮಾನಿಗಳು, ಸಂಘ ಸಂಸ್ಥೆಗಳ ಪ್ರತಿನಿಧಿಗಳು ಶ್ರೀ ಕೆ. ಬಿ. ಷಣ್ಮುಖಪ್ಪನವರಿಗೆ ಹಾರ ಮತ್ತು ನೆನಪಿನ ಕಾಣಿಕೆಗಳನ್ನಿತ್ತು ತಮ್ಮ ಪ್ರೀತಿ-ವಿಶ್ವಾಸಗಳನ್ನು ವ್ಯಕ್ತಪಡಿಸಿದರು.

ಸಾರ್ವಜನಿಕ ಸೇವಾಕ್ಷೇತ್ರದ ಸೇವೆಗಾಗಿ ಶ್ರೀ ಷಣ್ಮುಖಪ್ಪನವರಿಗೆ ಸಂದ ಅಂದಿನ ಗೌರವ ನಿಜಕ್ಕೂ ಹೃದಯಸ್ಪರ್ಶಿಯಾಗಿತ್ತು. ಹಣಕಾಸು ಸಮಿತಿಯ ಅಧ್ಯಕ್ಷ ಶ್ರೀ ಬಿ. ಆರ್. ವಿಶ್ವನಾಥ ಶೆಟ್ಟಿ ಅವರ ವಂದನಾರ್ಪಣೆಯೊಂದಿಗೆ ಸಮಾರಂಭ ಮುಕ್ತಾಯವಾಯಿತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕರ್ನಾಟಕ ಶಾಖೆಯ ರಾಜ್ಯ ಕಾರ್ಯದರ್ಶಿ ಶ್ರೀ ಎಂ. ಸೂರ್ಯನಾರಾಯಣಪ್ಪ ಅವರು ತುಂಬ ಶಿಸ್ತಿನಿಂದ ಸಭಾಕಾರ್ಯಕ್ರಮ ನಿರ್ವಹಿಸಿದರು.

*****************

# AN INSPIRATION FOR SCOUTS

**Padmini Sitaraman speaks to Mr. Kondajji B. Shanmukhappa, State Chief Commissioner of the Bharat Scouts and Guides**

As a boy, Mr. Kondajji B. Shanmukhappa watched with awe and admiration his father, the late Kondajji Basappa's involvement in the Scout Movement. Kondajji Basappa, who was a member of the Indira Gandhi and Nijalingappa Cabinets, was a Scout himself and attended the Third World Jamboree held in Austria in the Fifties.

This inspired young Shanmukhappa to become a Scout himself. He remembers marching in the Dasara procession as a Boy Scout, with the Maharaja of Mysore riding the elephant.

"Those were proud moments", he recalls. An Assistant District Commissioner of Bangalore in 1971, he is today the State Chief Commissioner of the Bharat Scouts and Guides, having been elected unanimously for a second term (1996-1999).

"My dream is that the Movement should spread to every nook and corner of Karnataka. All schools should have a Scout and Guide unit. If this happens, society will undergo a remarkable transformation," he says. The Movement motivates the youth to become disciplined citizens and responsible leaders.

Mahatma Gandhi said he wished that every home in India would have children who were as disciplined as the Scouts and Guides.

Pandit Jawaharlal Nehru observed: "Scouts and Guides are excellent material and the more they expand, the better for the country".

There are 1.76 lakh Scouts and Guides in the State as against 1.21 lakhs in 1992-93, thanks to the efforts of Mr. Shanmukhappa, who is a banker by profession (he is the DGM of the Karnataka State Co-operative Apex Bank Ltd.). His contribution to the Movement has fetched him the "Silver Elephant" Award.

The award was presented to him on November 16, 1996, by the then President, Dr. Shankar Dayal Sharma. "I feel it is a honour to the State," says Mr. Shanmukhappa, a soft-spoken and unpretentious person.

That was not the first time he had bagged an award for rendering meritorious service. In 1975, he was given the "Medal of Merit". Karnataka is ranked sixth in the country in Scouting and Guiding, but in terms of trained professionals, holding of camps and the administrative set-up, it is almost at the top. "Our

trained professionals (over 100) are in great demand. Even Delhi asks us to send them when they conduct training programmes," says Mr. Shanmukhappa.

He is also proud of the fact that 500 children in the State have become eligible to receive the President's Scouts and Guides Certificate for which only about 60 qualified, 10 years ago.

This recognition is given only to students who have crossed the various stages of training – of Pravesh, Pratham Sopanam, Dwithiya Sopanam, Thritiya Sopanam and Rajya Puraskar.

To give a greater thrust to the Scout movement, Mr. Shanmukhappa has evolved a programme for the next three years. It includes a plan to improve the functioning of the district associations; help districts to continue organising badge work camps; provide financial stability; expand membership; and develop the camp sites at the State and District level.

High on the agenda is a programme to improve the work culture. Says Mr. Shanmukhappa: "In the rural areas, the Movement is yet to pick up because of the expenditure that has to be incurred in providing uniforms. A set including shoes will cost at least Rs. 400 which parents of school children cannot afford. We have asked the panchayats to extend assistance for providing uniforms, so that deserving boys and girls get help to join the Movement".

With the Rural Development and Panchayat Raj Department issuing a circular asking zilla panchayats to support the Scout Movement, funds will be forthcoming. However, a plan has to be submitted by the district associations, he says. Besides, schools will have to set aside one period a week for scouts/ guides activities, as per the Government's directive. "Earlier, this used to be voluntary. All these, I hope, will go a long way in giving a fillip to the Movement," he adds. There is also a plan to set up a fund to encourage activities of Scouts/ Guides in the State.

Mr. Shanmukhappa (54) has been associated with a number of organisations including the Akhila Karnataka Veerashaiva Mahasabha; the Karnataka Veerashaiva Vidyabhivruddi Nidhi Samsthe, the Commerce Graduate's Association; the Bangalore University Senate; the Karnataka State Association for the Blind; and the Indian Red Cross Society.

He was presented with the "Certificate of Merit" for services rendered to the Red Cross Movement by Mr. R. Venkataraman as President.

Mr. Shanmukhappa feels that Scouts and Guides could be involved in the 'Clean Bangalore' campaign of the Bangalore City Corporation and also in other social activities. "The police could take the help of the scouts unit of a particular area for night patrolling and include them in the watch dog committees, as we have units in different areas in Bangalore and towns," he says.

**The Hindu,** 27-10-1997



ವೇದಿಕೆಯಲ್ಲಿ : ಮುಖ್ಯಮಂತ್ರಿಗಳು, ಶ್ರೀ ತರಳಬಾಳು ಜಗದ್ಗುರುಗಳು, ಶ್ರೀ ಸುತ್ತೂರು ಜಗದ್ಗುರುಗಳು
ಶ್ರೀ ಷಣ್ಮುಖಪ್ಪ ದಂಪತಿಗಳು



'ಕ್ರಿಯಾಶೀಲ' ಅಭಿನಂದನ ಸಂಚಿಕೆಯನ್ನು ಅವಲೋಕಿಸುತ್ತಿರುವ ಪೂಜ್ಯ ಜಗದ್ಗುರುದ್ವಯರು




ಶ್ರೀ ಕೆ.ಬಿ. ಷಣ್ಮುಖಪ್ಪನವರಿಗೆ ಶ್ರೀ ಗೊ.ರು. ಚನ್ನಬಸಪ್ಪ ಅವರಿಂದ ಅಭಿನಂದನ ಪತ್ರ ಅರ್ಪಣೆ



ಕಲಾತ್ಮಕ ಅಭಿನಂದನ ಪತ್ರ



ರಾಜ್ಯ ಸ್ಕೌಟ್ಸ್ ಕಮಿಷನರ್ ಶ್ರೀ ಸಿ.ಆರ್. ಮಹಮದ್ ಜಹಿರುದ್ದೀನ್ ಮತ್ತು ಗೈಡ್ಸ್ ಕಮಿಷನರ್
ಶ್ರೀಮತಿ ಲಲಿತಾ ಕೃಷ್ಣಸ್ವಾಮಿ ಅವರಿಂದ ರಾಜ್ಯ ಸಂಸ್ಥೆಯ ಪರವಾಗಿ ನೆನಪಿನ ಕಾಣಿಕೆ ಅರ್ಪಣೆ



ಅಭಿನಂದನ ಸಮಿತಿ ಗೌರವಾಧ್ಯಕ್ಷ ಶ್ರೀ ಕೆ.ಎಂ. ನಂಜಪ್ಪ ಅವರಿಂದ ಸಮಿತಿಯ ಪರವಾಗಿ ನೆನಪಿನ ಕಾಣಿಕೆ ಕೊಡುಗೆ



ಮುಖ್ಯಮಂತ್ರಿ ಶ್ರೀ ಜೆ.ಹೆಚ್. ಪಟೇಲ್ ಅವರಿಂದ ಫಲ ಕಾಣಿಕೆ ನೀಡಿಕೆ. ಜೊತೆಯಲ್ಲಿ ರಾಜ್ಯದ ಸಾರಿಗೆ ಸಚಿವ ಶ್ರೀ ಪಿ.ಜಿ.ಆರ್. ಸಿಂಧ್ಯ, ಎಡಕೊನೆಯಲ್ಲಿ ಶ್ರೀಮತಿ ಲೀಲಾ ಷಣ್ಮುಖಪ್ಪ



ಶ್ರೀ ಕೆ.ಬಿ. ಷಣ್ಮುಖಪ್ಪನವರು ತಮಗೆ ಅಭಿನಂದನ ಸಮಿತಿ ನೀಡಿದ ಮೂರು ಲಕ್ಷ ರೂ.ಗಳ ಸೇವಾನಿಧಿಯ ಚೆಕ್ಕನ್ನು ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಧ್ಯಕ್ಷರೂ ಆಗಿರುವ ಮುಖ್ಯಮಂತ್ರಿ ಶ್ರೀ ಜೆ.ಹೆಚ್. ಪಟೇಲ್ ಅವರಿಗೆ ಅರ್ಪಿಸುತ್ತಿರುವುದು



ಮುಖ್ಯಮಂತ್ರಿಗಳು ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು. ವೇದಿಕೆಯಲ್ಲಿ : ಶ್ರೀಮತಿ ಲಲಿತಾ ಕೃಷ್ಣಸ್ವಾಮಿ, ಪ್ರೊ. ಎಂ. ಸೂರ್ಯನಾರಾಯಣಪ್ಪ, ಶ್ರೀ ಎಂ. ಕೋಟೋಜಿರಾವ್, ಶ್ರೀ ಜಿ. ನಾರಾಯಣ ಮತ್ತು ಶ್ರೀ ಎಸ್. ಲಕ್ಷ್ಮಣರಾವ್




ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಆಯುಕ್ತ ಶ್ರೀ ವಿ.ಪಿ. ದೀನದಯಾಳು ನಾಯುಡು ಅವರಿಂದ
ಶ್ರೀ ಕೆ.ಬಿ. ಷಣ್ಮುಖಪ್ಪನವರಿಗೆ ಸನ್ಮಾನ



ಶ್ರೀ ಕೆ. ಬಿ. ಷಣ್ಮುಖಪ್ಪ ದಂಪತಿಗಳು



ಪ್ರೇಕ್ಷಕ ಸಮೂಹ : ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಉಪಾಧ್ಯಕ್ಷೆ ಶ್ರೀಮತಿ ಲೀಲಾ ಆಂಜನಪ್ಪ, ಅಖಿಲ ಭಾರತ್ ವೀರಶೈವ ಮಹಾಸಭಾ ಕಾರ್ಯದರ್ಶಿ ಶ್ರೀ ಬಿ. ಬಸವಯ್ಯ, ಬೆಂಗಳೂರಿನ ಮಾಜಿ ಮೇಯರ್ ಶ್ರೀ ಜಿ. ನಾರಾಯಣ ಮೊದಲಾದವರು



ಪ್ರೇಕ್ಷಕ ಸಮೂಹ : ಪದ್ಮಭೂಷಣ ಡಾ|| ಎಂ.ಸಿ. ಮೋದಿ, ಅಪೆಕ್ಸ್ ಬ್ಯಾಂಕ್ ನಿವೃತ್ತಾಧಿಕಾರಿ ಶ್ರೀ ರಾಜಶೇಖರ್, ರಾಜ್ಯ ಸಂಸ್ಥೆಯ ಕೋಶಾಧ್ಯಕ್ಷ ಶ್ರೀ ಎಂ.ಪಿ. ಖಾಲಿದ್, ಬೆಳಗಾಂ ವಿಭಾಗದ ಸಹಾಯಕ ಆಯುಕ್ತ ಶ್ರೀ ಪಿ.ಎನ್. ಜೋಶಿ ಮೊದಲಾದವರು



ಪ್ರೇಕ್ಷಕ ಸಮೂಹ : ರಾಜ್ಯ ಸಂಸ್ಥೆಯ ಕಾರ್ಯಕಾರಿ ಮಂಡಳಿ ಸದಸ್ಯರಾದ ಶ್ರೀ ಕೆ.ಪಿ. ಕೃಷ್ಣಸ್ವಾಮಿರಾವ್ ದಂಪತಿಗಳು, ಕಂದಗಲ್ ಗೌಡರ ಶಂಕರಪ್ಪ, ಕೈಗಾರಿಕೋದ್ಯಮಿ ಶ್ರೀ ಎಂ. ಬಸವರಾಜಪ್ಪ, ಮಾಜಿ ಸಚಿವ ಶ್ರೀ ಎಸ್.ಎಂ.ಕೆ. ಸೋಗಿ ಮೊದಲಾದವರು



ಪ್ರೇಕ್ಷಕ ಸಮೂಹ : ಶ್ರೀ ಕುರ್ಕಿ ಗೌಡರ ಜಯದೇವಪ್ಪ, ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾವ್, ರಾಜ್ಯ ಸಂಸ್ಥೆಯ ಮೈಸೂರು ವಿಭಾಗದ ಸಹಾಯಕ ಆಯುಕ್ತೆ ಶ್ರೀಮತಿ ಎಂ.ಜಿ. ಬೋಪಮ್ಮ ಮೊದಲಾದವರು




ಶ್ರೀ ಕೆ.ಬಿ. ಷಣ್ಮುಖಪ್ಪ ದಂಪತಿಗಳೊಡನೆ ಸಾಂಸ್ಕೃತಿಕ ಕಾರ್ಯಕ್ರಮ ನೀಡಿದ ಸ್ಕೌಟ್ಸ್ ಮಕ್ಕಳು

# ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬಸಪ್ಪ ಷಣ್ಮುಖಪ್ಪ ಅವರಿಗೆ 'ಸಿಲ್ವರ್ ಎಲಿಫೆಂಟ್' ರಾಷ್ಟ್ರಪ್ರಶಸ್ತಿ ದೊರಕಿದ ಸಂದರ್ಭದಲ್ಲಿ ಅಭಿಮಾನಿಗಳು ಅರ್ಪಿಸಿದ ಅಭಿನಂದನ ಪತ್ರ

ಕರ್ನಾಟಕದ ಸಾರ್ವಜನಿಕ ಸೇವಾಕ್ಷೇತ್ರದಲ್ಲಿ ಶ್ರೀ ಕೊಂಡಜ್ಜಿ ಬಸಪ್ಪ ಷಣ್ಮುಖಪ್ಪ ಒಬ್ಬ ಅಪರೂಪದ ವ್ಯಕ್ತಿ. ಸತ್ಯ, ಸಮಾಧಾನ, ಸರ್ವಾಭಿಮಾನ ಅವರ ಆಸ್ತಿ. ಕೆ. ಬಿ. ಷಣ್ಮುಖಪ್ಪ ಎಂದೇ ಪರಿಚಿತ.

ಜನನ ೧೯೪೩ ಡಿಸೆಂಬರ್ ೨೦. ತಂದೆ ನಾಡಿನ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರದಲ್ಲಿ ಹೆಸರಾಗಿದ್ದ ಲಿಂ॥ ಕೊಂಡಜ್ಜಿ ಬಸಪ್ಪ. ತಾಯಿ ಲಿಂ॥ ಸರ್ವಮಂಗಳಮ್ಮ. ಶ್ರೀ ಷಣ್ಮುಖಪ್ಪನವರು ತಂದೆಯಂತೆಯೇ ಗೌರವಾನ್ವಿತ ವ್ಯಕ್ತಿ. ಆಪತ್ತಿಗೆ ಅಂಜದ, ಕಷ್ಟಕ್ಕೆ ಕುಂದದ ಮನೋದಾರ್ಢ್ಯ. ಹೆತ್ತವರ ಬಗೆಗೆ ಮಕ್ಕಳು ಹೇಗಿರಬೇಕೆಂಬುದಕ್ಕೆ ಶ್ರೀ ಷಣ್ಮುಖಪ್ಪ ಒಂದು ಉದಾಹರಣೆ. ಪ್ರೇಮದ ಮಡದಿ ಶ್ರೀಮತಿ ಲೀಲಾ, ಪ್ರೀತಿಯ ಮಗಳು ಚಿ॥ ನಾಗರತ್ನ, ಯೋಜಿತ ಕುಟುಂಬ.

ತಂದೆಯ ಪ್ರಭಾವ, ಬಾಲ್ಯದಿಂದಲೇ ಸ್ಕೌಟ್ ಮನೋಭಾವ. ಸಜ್ಜನರನ್ನು ಕಂಡರೆ ಉಬ್ಬುವ ಹೃದಯ, ಸತ್ಕಾರ್ಯಗಳಲ್ಲಿ ಸಹಕರಿಸುವ ಮನಸ್ಸು. ವಂಶಪರಂಪರೆಯ ಬಳುವಳಿ ಕ್ರಿಯಾಶೀಲತೆ. ವಿದ್ಯಾರ್ಥಿಯಾಗಿ ವಾಣಿಜ್ಯ ಮತ್ತು ಕಾನೂನು ಪದವಿ ಗಳಿಕೆ; ವಿವೇಕಿಯಾಗಿ ಲೋಕಾನುಭವ ಬಳಕೆ. ಶ್ರೀ ಷಣ್ಮುಖಪ್ಪನವರ ಒಂದು ವಿಶಿಷ್ಟ ಸಂಪತ್ತೆಂದರೆ ಅವರ ಅಗಾಧ ನೆನಪಿನ ಶಕ್ತಿ. ಅವರೊಂದು ಗಣಕಯಂತ್ರ. ಅವರ ನೆನಪಿನ ಕೋಶದಲ್ಲಿ ದಾಖಲಾಗಿರುವ ವ್ಯಕ್ತಿ - ವಿಳಾಸಗಳು, ವಾಹನ - ದೂರವಾಣಿ ಸಂಖ್ಯೆಗಳು ಸಾವಿರ ಸಾವಿರ.

ಜೀವನೋದ್ಯೋಗಕ್ಕಾಗಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಹುದ್ದೆ, ಜೊತೆಯಲ್ಲಿಯೇ ಸಾರ್ವಜನಿಕ ಸೇವೆಯ ಶ್ರದ್ಧೆ. ಅಖಿಲ ಭಾರತ ವೀರಶೈವ ಮಹಾಸಭೆ, ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ನಿಧಿ ಸಂಸ್ಥೆ, ವಾಣಿಜ್ಯ ಪದವೀಧರರ ಸಂಘ, ಕರ್ನಾಟಕ ಅಂಧರ ಕ್ಷೇಮಾಭ್ಯುದಯ ಸಂಘ, ಬೆಂಗಳೂರು ವಿಶ್ವವಿದ್ಯಾಲಯ ಸೆನೆಟ್, ಭಾರತೀಯ ಸಾಮಾಜಿಕ - ಆರ್ಥಿಕ ಅಧ್ಯಯನ ಸಂಸ್ಥೆ, ರಾಷ್ಟ್ರೀಯ ನರವಿಜ್ಞಾನ ಮತ್ತು ಮಾನಸಿಕ ಆರೋಗ್ಯ ಸಂಸ್ಥೆಯ ಸಂದರ್ಶಕ ಮಂಡಳಿ, ಬೆಂಗಳೂರಿನ ಮಾಡೆಲ್ ಎಜುಕೇಶನ್ ಸೆಂಟರ್ - ಹೀಗೆ ಅನೇಕ ಸೇವಾ ಸಂಸ್ಥೆಗಳಲ್ಲಿ - ವಿವಿಧ ಪದಾಧಿಕಾರಿ ಹುದ್ದೆ.

ಶ್ರೀ ಷಣ್ಮುಖಪ್ಪನವರ ಜೀವನಾಡಿಯ ಸೇವಾಕ್ಷೇತ್ರಗಳೆಂದರೆ ಸ್ಕೌಟ್ಸ್ ಮತ್ತು ಗೈಡ್ಸ್, ರೆಡ್ ಕ್ರಾಸ್ ಮತ್ತು ಅಂಧರ ಕ್ಷೇಮ. ೧೯೫೫ರಿಂದ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಮೂಲವಾಹಿನಿಯಲ್ಲಿರುವ ಶ್ರೀ ಷಣ್ಮುಖಪ್ಪನವರು ೧೯೯೩ರಿಂದ ಆ ಸಂಸ್ಥೆಯ ಕರ್ನಾಟಕ ಶಾಖೆಯ ಮುಖ್ಯ ಆಯುಕ್ತರು. ೧೯೮೩ರಿಂದ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಮಂಡಳಿ ಸದಸ್ಯರು. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಅವರಿಂದ ಸಂದಿರುವ ಸೇವೆ ಮಹತ್ವಪೂರ್ಣ. ಅವರ ಸೇವೆಯ ಮನ್ನಣೆಯಾಗಿ ೧೯೭೫ರಲ್ಲಿ 'ಮೆಡಲ್ ಆಫ್ ಮೆರಿಟ್' ಪದಕ ದೊರಕಿತು. ೧೯೯೬ರಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಕ್ಷೇತ್ರದ ಅತ್ಯುನ್ನತ ರಾಷ್ಟ್ರೀಯ ಗೌರವವಾದ 'ಸಿಲ್ವರ್ ಎಲಿಫೆಂಟ್' ಪ್ರಶಸ್ತಿ ಬಂದಿದೆ. ಇದು ಕರ್ನಾಟಕ ರಾಜ್ಯ ಶಾಖೆಗೆ ಹೆಮ್ಮೆ, ಕನ್ನಡಿಗರಿಗೆ ಅಭಿಮಾನ. ಭಾರತೀಯ ರೆಡ್ ಕ್ರಾಸ್ ಸಂಸ್ಥೆಯೊಡನೆಯೂ ಶ್ರೀ ಷಣ್ಮುಖಪ್ಪನವರಿಗೆ ಸುದೀರ್ಘ ಸಂಬಂಧ. ೧೯೭೮ರಿಂದ ಸಂಸ್ಥೆಯಲ್ಲಿ ಸಲ್ಲಿಸಿದ ಗಮನಾರ್ಹ ಸೇವೆಗಾಗಿ ೧೯೮೮ರಲ್ಲಿ 'ಸರ್ಟಿಫಿಕೇಟ್ ಆಫ್ ಮೆರಿಟ್' ರಾಷ್ಟ್ರ ಪ್ರಶಸ್ತಿಯ ಗೌರವ.

೧೯೮೪ರಲ್ಲಿ ನ್ಯೂಜಿಲೆಂಡ್ ಮತ್ತು ೧೯೯೫ರಲ್ಲಿ ಸಿಂಗಾಪುರದಲ್ಲಿ ನಡೆದ ಏಷಿಯಾ ಪೆಸಿಫಿಕ್ ಪ್ರಾದೇಶಿಕ ಸ್ಕೌಟ್ ಸಮ್ಮೇಳನದಲ್ಲಿ ಶ್ರೀ ಷಣ್ಮುಖಪ್ಪನವರು ಭಾರತದ ಪ್ರತಿನಿಧಿ. ೧೯೯೭ರಲ್ಲಿ ಇಂಗ್ಲೆಂಡ್, ಫ್ರಾನ್ಸ್, ಬೆಲ್ಜಿಯಂ, ಜರ್ಮನಿ, ನೆದರ್‌ಲ್ಯಾಂಡ್ಸ್, ಲಕ್ಸಂಬರ್ಗ್ ಮೊದಲಾದ ಐರೋಪ್ಯ ರಾಷ್ಟ್ರಗಳಲ್ಲಿ ಪ್ರವಾಸ.

ಇದಷ್ಟೇ ಅಲ್ಲ. ತರಳಬಾಳು ಅಂತರ್‌ರಾಷ್ಟ್ರೀಯ ಕೇಂದ್ರ, ಕನ್ನಡ ಸಾಹಿತ್ಯ ಪರಿಷತ್ತು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ವಿಶ್ವಬಂಧು ಸೇವಾ ಪ್ರತಿಷ್ಠಾನ, ಮುಂಬೈಯ ಫೋರಂ ಆಫ್ ಫ್ರೀ ಎಂಟರ್‌ಪ್ರೈಸಸ್ – ಹೀಗೆ ಇನ್ನೂ ಅನೇಕ ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಸ್ಥೆಗಳ ನಿಕಟ ಸಂಬಂಧ.

ಇಂತಹ ವಿಸ್ತೃತ ಹಾಗೂ ವೈವಿಧ್ಯಮಯ ಸೇವಾನುಭವದ ಗೌರವಾನ್ವಿತ ವ್ಯಕ್ತಿಯನ್ನು ಅಭಿನಂದಿಸಲು 'ಕ್ರಿಯಾಶೀಲ' ಎಂಬ ಅಭಿನಂದನ ಸಂಚಿಕೆಯನ್ನು ಪ್ರಕಟಿಸಿದ್ದೇವೆ. ಅವರ ಮೂರು ದಶಕಗಳ ಸೇವೆಯ ಸ್ಮರಣೆಗಾಗಿ 3 ಲಕ್ಷ ರೂಪಾಯಿಗಳ ಸೇವಾನಿಧಿಯೊಂದನ್ನು ಅವರಿಗೆ ಅರ್ಪಿಸುತ್ತಿದ್ದೇವೆ.

ಶ್ರೀ ಕೆ.ಬಿ. ಷಣ್ಮುಖಪ್ಪನವರಿಗೆ ಹಾರ್ದಿಕ ಅಭಿನಂದನೆಗಳು.

ಬೆಂಗಳೂರು
೨೬ ಅಕ್ಟೋಬರ್ ೧೯೯೭

ಅಧ್ಯಕ್ಷರು ಮತ್ತು ಸದಸ್ಯರು
ಕೊಂಡಜ್ಜಿ ಷಣ್ಮುಖಪ್ಪ ಅಭಿನಂದನ ಸಮಿತಿ

# ಅಭಿನಂದಿತರ ನುಡಿ

*ಪರಮ ಪೂಜ್ಯ ಜಗದ್ಗುರುಗಳೇ, ಸನ್ಮಾನ್ಯ ಮುಖ್ಯಮಂತ್ರಿಗಳೇ, ಸನ್ಮಾನ್ಯ ಮಂತ್ರಿಗಳೇ, ಅತಿಥಿ-ಆಹ್ವಾನಿತರೇ, ಬಂಧುಗಳೇ,*

ಇಂದು ನನ್ನ ಜೀವನದಲ್ಲಿ ಒಂದು ಅಪೂರ್ವ ವಾತಾವರಣದಲ್ಲಿದ್ದೇನೆ. ನನ್ನ ವೃತ್ತಿಸೇವೆಯಲ್ಲಿ ಸಾರ್ವಜನಿಕ ಸಂಬಂಧದಲ್ಲಿ ಸಾಕಷ್ಟು ಮಾತನಾಡುತ್ತಿದ್ದ ನಾನು ಇಂದು ಮೂಕನಾಗಿದ್ದೇನೆ. ತಮ್ಮೆಲ್ಲರ ಅಭಿಮಾನದ ಮಹಾಪೂರದಲ್ಲಿ ನಾನು ಮುಳುಗಿ ಹೋಗಿದ್ದೇನೆ. ಏನು ಮಾತನಾಡಬೇಕೆಂಬುದೇ ತಿಳಿಯುತ್ತಿಲ್ಲ.

ಆದರೆ ತಾವೆಲ್ಲ ತೋರಿರುವ ಅಗಾಧ ಪ್ರೀತಿ-ವಿಶ್ವಾಸಗಳಿಗೆ ಕೃತಜ್ಞತೆ ಅರ್ಪಿಸಬೇಕಾದುದು ನನ್ನ ಕರ್ತವ್ಯವೆಂದು ಭಾವಿಸಿದ್ದೇನೆ. ಇಂತಹ ಅನೇಕ ಸಮಾರಂಭಗಳಲ್ಲಿ ಒಬ್ಬ ಕಾರ್ಯಕರ್ತನಾಗಿ ಅನೇಕರನ್ನು ಗೌರವಿಸುವ ಕೆಲಸ ಮಾಡಿದ ನಾನೇ ಇಂದು ಗೌರವ ಸ್ವೀಕರಿಸುವ ಸಂದರ್ಭ ಬಂದಿದೆ. ಇದು ಒಂದು ರೀತಿಯಲ್ಲಿ ನನಗೆ ಸಂಕೋಚದ ಸನ್ನಿವೇಶ. ಇದುವರೆಗೆ ವೇದಿಕೆಯ ಮೇಲಿರುವ ಹಿರಿಯರುಗಳಾದ ಶ್ರೀ ವಿ. ಪಿ. ದೀನದಯಾಳು ನಾಯುಡು, ಶ್ರೀ ಎನ್. ಲಕ್ಷ್ಮಣರಾವ್, ಶ್ರೀ ಜಿ. ನಾರಾಯಣ, ಶ್ರೀ ಎಂ. ಕೋಟೋಜಿರಾವ್, ನನ್ನ ಬಗೆಗೆ ಆಡಿದ ಅಭಿಮಾನದ ನುಡಿಗಳಿಂದ ನನ್ನ ಹೃದಯ ತುಂಬಿಬಂದಿದೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಇಂದು ನನಗೆ ಸಂದ ಎಲ್ಲ ಗೌರವಕ್ಕೂ ನನ್ನ ತಂದೆಯವರಾದ ಕೊಂಡಜ್ಜಿ ಬಸಪ್ಪ ಮತ್ತು ತಾಯಿ ಸರ್ವಮಂಗಳಮ್ಮ ಕಾರಣರು. ಬದುಕಿನ ಕಷ್ಟ-ನಷ್ಟಗಳ ಮಧ್ಯೆಯೂ ಎಂಟು ಮಕ್ಕಳ ಕುಟುಂಬವನ್ನು ನಿರ್ವಹಿಸಿ, ನಮ್ಮ ತಾಯಿ-ತಂದೆ ನಮಗೆ ಮಾರ್ಗದರ್ಶನ ನೀಡಿದರು. ಪ್ರೀತಿ-ವಿಶ್ವಾಸದಿಂದ ಸಾಕಿ ಸಲಹಿದರು. ಸಮಾಜಕ್ಕೆ ಬೇಕಾಗುವಂತೆ ಬದುಕಲು ತಿಳಿಸಿದರು. ತಮಗೆಲ್ಲ ತಿಳಿದಿರುವಂತೆ ನಮ್ಮ ತಂದೆ ನೀತಿ-ನಿಯಮಗಳಿಗೆ, ಶಿಸ್ತು-ಸಭ್ಯತೆಗಳಿಗೆ, ಸೇವೆ-ಸಾಧನೆಗಳಿಗೆ ತಮ್ಮನ್ನೇ ಮುಡುಪಾಗಿಟ್ಟುಕೊಂಡಿದ್ದವರು. ಹಾಗೆಯೇ ಮನೆಗೆ ಬಂದ ಅತಿಥಿಗಳ ಸತ್ಕಾರ, ಮಕ್ಕಳ ಮೇಲಿನ ಕಕ್ಕುಲತೆ, ತಂದೆಯವರ ಸೇವಾಕಾರ್ಯಕ್ಕೆ ಬೆಂಬಲ - ಈ ಎಲ್ಲ ಗುಣಗಳ ಸದ್ಗೃಹಿಣಿಯಾಗಿದ್ದವರು ನಮ್ಮ ತಾಯಿ. ನನ್ನ ಬದುಕಿಗೆ, ಭವಿಷ್ಯಕ್ಕೆ ಅಕ್ಕರೆಯ ನೀರೆರೆದು ಪೋಷಿಸಿದ ತಂದೆ-ತಾಯಿ ಇಬ್ಬರೂ ಈಗ ನಮ್ಮೊಡನಿಲ್ಲ. ಆದರೆ ಅವರ ಆಶೀರ್ವಾದದ ದಿವ್ಯ ರಕ್ಷೆ ನನಗಿದೆ. ಅವರನ್ನು ಭಕ್ತಿ ಭಾವದಿಂದ ಈ ಸಂದರ್ಭದಲ್ಲಿ ನೆನೆಯುತ್ತೇನೆ.

ನಮ್ಮ ತಂದೆ ಕೊಂಡಜ್ಜಿ ಬಸಪ್ಪನವರು ತಾವು ಹುಟ್ಟಿದ ಹಳ್ಳಿಯ ಹೆಸರನ್ನು ಬೆಳಗಿಸಿದವರು. ಸಂಸಾರದ ಹೊಣೆಯನ್ನೆಲ್ಲಾ ನಮ್ಮ ತಾಯಿಯವರಿಗೆ ವಹಿಸಿ ಸಾರ್ವಜನಿಕ ಸೇವೆಯಲ್ಲಿ ತೊಡಗಿದವರು. ಅವರು ಸಲ್ಲಿಸಿದ ಸಾರ್ವಜನಿಕ ಸೇವೆ, ರಾಜಕೀಯ ಕ್ಷೇತ್ರದಲ್ಲಿ ವಹಿಸಿದ ಪಾತ್ರ, ವಿಶೇಷವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಗೆ ನೀಡಿದ ಕೊಡುಗೆ ಅತ್ಯಂತ ಸ್ಮರಣೀಯ; ಅನುಪಮ. ರಾಜಕೀಯ ಕ್ಷೇತ್ರದಲ್ಲಿದ್ದರೂ ಅವರ ಒಲವೆಲ್ಲ ಸಾರ್ವಜನಿಕ ಸೇವೆಯ ಕಡೆಗೇ ಹೆಚ್ಚಾಗಿತ್ತು.

ನನ್ನನ್ನು ಈ ಸ್ಕೌಟ್ ಚಳುವಳಿಯ ವಾಹಿನಿಯಲ್ಲಿ ಸೇರಿಸಿದವರೇ ನಮ್ಮ ತಂದೆ. ಈ ಚಳುವಳಿ ಒಂದು ಪವಿತ್ರ ಕಾರ್ಯಕ್ಷೇತ್ರ. ಸಭ್ಯ ನಾಗರಿಕ ಸಮಾಜದ ಸೃಷ್ಟಿಯೇ ಇದರ ಆಶಯ. ಸಹಕಾರ, ಶಿಸ್ತು, ಅನುಕಂಪ, ಜೀವನ ವಿಶ್ವಾಸ, ಸೇವೆ ಮೊದಲಾದ ಮಾನವೀಯ ಸದ್ಗುಣಗಳನ್ನು ಬೆಳೆಸುವ ಕಾರಣದಿಂದಾಗಿ ಈ

ಚಳುವಳಿ ವಿಶ್ವವ್ಯಾಪ್ತಿಯಾಗಿ ಸರ್ವರ ಮನ ಸೆಳೆದಿದೆ. ವಿಶ್ವದ 150 ರಾಷ್ಟ್ರಗಳಲ್ಲಿ ಸ್ವಯಂಸೇವೆ ಸಲ್ಲಿಸುತ್ತಿರುವ ಈ ಮಹಾನ್ ಸಂಘಟನೆಯಲ್ಲಿ ಕೋಟ್ಯಾಂತರ ಮಕ್ಕಳು ಮತ್ತು ಯುವಜನರು ತಮ್ಮನ್ನು ತಾವೇ ತೊಡಗಿಸಿಕೊಂಡಿದ್ದಾರೆ.

ಭಾರತ್ ಸ್ಕೌಟ್ಸ್ ಮತ್ ಗೈಡ್ಸ್ ನಮ್ಮ ರಾಷ್ಟ್ರದ ಒಂದು ಮಹತ್ವಪೂರ್ಣ ಸ್ವಯಂಸೇವಾಸಂಸ್ಥೆ. ಈ ಸಂಸ್ಥೆಯ ಕರ್ನಾಟಕ ರಾಜ್ಯ ಘಟಕವು ರಾಷ್ಟ್ರದ ಸ್ಕೌಟಿಂಗ್ ಮತ್ತು ಗೈಡಿಂಗ್ ನಕ್ಷೆಯಲ್ಲಿ ವಿಶಿಷ್ಠ ಸ್ಥಾನಮಾನ ಪಡೆದಿದೆ ಎಂದು ತಮ್ಮ ಗಮನಕ್ಕೆ ತರಲು ನನಗೆ ಹೆಮ್ಮೆ ಎನಿಸುತ್ತದೆ. ಕರ್ನಾಟಕದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಗೆ ಮಹತ್ವದ ಸ್ಥಾನ ಬರಲು ಕಾರಣರಾದ ಹಿಂದಿನ ರಾಜ್ಯ ಮುಖ್ಯ ಆಯುಕ್ತರುಗಳಾದ ಜಸ್ಟೀಸ್ ಕೆ. ಶಂಕರನಾರಾಯಣರಾವ್, ಮೇಜರ್ ವೈ.ವಿ.ಕೆ. ಮೂರ್ತಿ, ಜೆ. ಬಿ. ಮಲ್ಲಾರಾಧ್ಯ, ಪ್ರೊ|| ಪಿ. ಶಿವಶಂಕರ್, ಕೊಂಡಜ್ಜಿ ಬಸಪ್ಪ, ವಿ. ಪಿ. ದೀನದಯಾಳು ನಾಯುಡು ಅವರುಗಳ ಸೇವೆಯನ್ನು ನಾವೆಲ್ಲಾ ಸ್ಮರಿಸಿಕೊಳ್ಳಬೇಕು.

ಇಂತಹ ಮಹಾನ್ ಸಂಸ್ಥೆಯ ಮುಖ್ಯ ಆಯುಕ್ತನಾಗಿ ಎರಡನೆಯ ಅವಧಿಗೆ ಆಯ್ಕೆಯಾಗಿ ಕಳೆದ ನಾಲ್ಕು ವರ್ಷಗಳಿಂದ ಸೇವೆಸಲ್ಲಿಸುವ ಅವಕಾಶ ನನಗೆ ಒದಗಿಬಂದಿದೆ. ಈ ಸ್ಥಾನದಲ್ಲಿದ್ದ ನಮ್ಮ ತಂದೆಯವರ ಕಾರ್ಯನಿರ್ವಹಣೆಯನ್ನು ಗಮನಿಸುತ್ತಿದ್ದ ನನಗೆ ಹಿರಿಯರಾದ ವಿ. ಪಿ. ದೀನದಯಾಳು ನಾಯುಡು, ಎ. ಡಿ. ಆನಂದನ್, ಡಾ|| ಎಸ್. ಬಿ. ಕೌಶಿಕ್, ಜಿ. ಶಿವಪ್ಪ, ಮೇಜರ್ ಎಂ. ಆರ್. ನಾರಾಯಣಸಿಂಗ್, ಎಂ. ಆರ್. ಲಕ್ಷ್ಮಮ್ಮ, ಡಾ|| ಸಿ. ಡಿ. ಜತ್ತನ್ನ, ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಮೊದಲಾದವರ ಮಾರ್ಗದರ್ಶನ ದೊರಕಿತು. ಅವರ ನೆರವನ್ನೆಲ್ಲಾ ನೆನೆಯುತ್ತೇನೆ.

ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಘಟನೆಯ ಗೌರವಾನ್ವಿತ ಪರಂಪರೆಯನ್ನು ಉಳಿಸಿಕೊಂಡು ಅದರ ಘನತೆಯನ್ನು ಹೆಚ್ಚಿಸಲು ನನ್ನ ಕೈಲಾದ ಪ್ರಯತ್ನ ನಡೆಸಿದ್ದೇನೆ. ಇದಕ್ಕೆ ನಮ್ಮ ರಾಜ್ಯ ಮಂಡಳಿ ಸದಸ್ಯರು ಮತ್ತು ಜಿಲ್ಲಾ ಘಟಕಗಳು ಹಾಗೂ ವಿವಿಧ ಹಂತದ ಕಾರ್ಯಕರ್ತರು ತುಂಬಾ ನೆರವಾಗಿದ್ದಾರೆ. ಇವರುಗಳಿಗೆ ನನ್ನ ಕೃತಜ್ಞತೆಗಳು. ಎಲ್ಲಕ್ಕಿಂತ ಮಿಗಿಲಾದುದು ನಮ್ಮ ರಾಜ್ಯ ಸರ್ಕಾರದ ಪ್ರೋತ್ಸಾಹ. ಹಿಂದೆಂದಿಗಿಂತ ಹೆಚ್ಚಿನ ನೆರವನ್ನು ಪ್ರಸಕ್ತ ಸರ್ಕಾರ ನೀಡುತ್ತಿದೆ. ಇದಕ್ಕಾಗಿ ನಾನು ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಜೆ.ಹೆಚ್. ಪಟೇಲ್ ಅವರು ಮತ್ತು ಯುವಜನಸೇವೆ ಹಾಗೂ ಕ್ರೀಡಾಖಾತೆಯ ರಾಜ್ಯ ಸಚಿವರಾದ ಶ್ರೀ ಅಜಯ ಕುಮಾರ್ ಸರ್‌ನಾಯಕ್ ಅವರಿಗೆ ಸಮಸ್ತ ಸ್ಕೌಟ್ ಮತ್ತು ಗೈಡ್ಸ್ ಬಳಗದ ಪರವಾಗಿ ಕೃತಜ್ಞತೆ ಅರ್ಪಿಸುತ್ತೇನೆ. ನನ್ನ ಇಬ್ಬರು ಸಹೋದರರ ಸಹಪಾಠಿಗಳೂ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಸ್ಕೌಟ್ ಸಂಸ್ಥೆ ಅಧ್ಯಕ್ಷರೂ, ನನ್ನ ಬಗ್ಗೆ ಸದಾ ಪ್ರೀತಿ ವಿಶ್ವಾಸಗಳನ್ನು ತೋರುತ್ತಾ ಬಂದಿರುವ ಸನ್ಮಾನ್ಯ ಸಾರಿಗೆ ಸಚಿವ ಶ್ರೀ ಪಿ. ಜಿ. ಆರ್. ಸಿಂಧ್ಯಾರವರಿಗೆ ನನ್ನ ಕೃತಜ್ಞತೆಗಳು.

ಈ ಸಂದರ್ಭದಲ್ಲಿ ಸನ್ಮಾನ್ಯ ಮುಖ್ಯ ಮಂತ್ರಿಗಳು, ಸನ್ಮಾನ್ಯ ಮಂತ್ರಿಗಳು, ನಾಡಿನ ಧರ್ಮ ಗುರುಗಳು ಮತ್ತು ಸಾರ್ವಜನಿಕರಲ್ಲಿ ನನ್ನದೊಂದು ವಿನಮ್ರ ಮನವಿ. ತಮಗೆಲ್ಲಾ ತಿಳಿದಿರುವಂತೆ 90 ವರ್ಷಗಳ ಇತಿಹಾಸವಿರುವ ಈ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿ ಸಭ್ಯಸಮಾಜದ ನಿರ್ಮಾಣದ ಒಂದು ಸಮರ್ಥ ವೇದಿಕೆ. ವ್ಯಕ್ತಿಯ ಎಳೆವಯಸ್ಸಿನಲ್ಲೇ ಶಿಸ್ತು ಮತ್ತು ಸೇವಾಸಕ್ತಿಗಳನ್ನು ಬೆಳೆಸುವ ಈ ಚಳುವಳಿಗೆ ರಾಜ್ಯ ಸರ್ಕಾರ ಹಾಗೂ ಸಾರ್ವಜನಿಕರು ಇನ್ನೂ ಹೆಚ್ಚಿನ ಬೆಂಬಲ ಮತ್ತು ಪ್ರೋತ್ಸಾಹ ನೀಡುವಂತಾಗಬೇಕು. ರಾಜ್ಯದ ಪ್ರತಿಯೊಂದು ಶಾಲೆಯಲ್ಲೂ ಕಡ್ಡಾಯವಾಗಿ ಸ್ಕೌಟ್ಸ್ ಮತ್ತು ಗೈಡ್ಸ್‌ನ ಒಂದು ಘಟಕವನ್ನು ತೆರೆಯುವಂತಾಗಬೇಕು. ಈ ಚಳುವಳಿಯಲ್ಲಿ ಆಸಕ್ತಿ ಇರುವ ಬಡಮಕ್ಕಳಿಗೆ ಉಚಿತ ಸಮವಸ್ತ್ರ ಇತ್ಯಾದಿ ವಿಶೇಷ ಉತ್ತೇಜನ ದೊರಕಬೇಕು. ರಾಜ್ಯಸಂಸ್ಥೆಗೆ ಸಹಾಯಧನವನ್ನು ಹೆಚ್ಚಿಸಿದರೆ, ಇನ್ನೂ ಹೆಚ್ಚಿನ

ಪ್ರಮಾಣದಲ್ಲಿ ಶಿಕ್ಷಕರ ತರಬೇತಿ, ಸ್ಕೌಟ್ಸ್ ಮತ್ತು ಗೈಡ್ಸ್ ಶಿಬಿರಗಳ ವ್ಯವಸ್ಥೆ, ದೊಡ್ಡಬಳ್ಳಾಪುರದ ಬಳಿ ಇರುವ ಬೆಸೆಂಟ್ ಪಾರ್ಕ್ ಶಿಬಿರ ಕೇಂದ್ರ ಮತ್ತು ಕೊಂಡಜ್ಜಿ ಬಳಿ ಇರುವ ತರಬೇತಿ ಕೇಂದ್ರಗಳ ಅಭಿವೃದ್ಧಿ ಮೊದಲಾದ ಕಾರ್ಯಗಳನ್ನು ಇನ್ನೂ ವ್ಯಾಪಕವಾಗಿ ನಡೆಸಲು ಅವಕಾಶವಾಗುತ್ತದೆ.

ಯುವಪೀಳಿಗೆಯ ಬಗೆಗೆ ಅಪಾರ ವಿಶ್ವಾಸ ಮತ್ತು ಭರವಸೆಗಳನ್ನು ಹೊಂದಿರುವ ನಮ್ಮ ರಾಜ್ಯದ ಮುಖ್ಯಮಂತ್ರಿಗಳು ಭಾರತದ ಸುವರ್ಣಮಹೋತ್ಸವ ವರ್ಷದ ನೆನಪಿಗಾಗಿ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ವಿಶೇಷ ನೆರವನ್ನು, ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯಲ್ಲಿರುವ ಬಡವಿದ್ಯಾರ್ಥಿಗಳಿಗೆ ಉಚಿತ ಸಮವಸ್ತ್ರ ನೀಡುವುದನ್ನು ಈ ಸಲದ ರಾಜ್ಯೋತ್ಸವ ಸಂದರ್ಭದಲ್ಲಿ ಪ್ರಕಟಿಸಬೇಕಾಗಿ ಮನವಿಮಾಡಿಕೊಳ್ಳುತ್ತೇನೆ. ತಮ್ಮೆಲ್ಲರ ಅಭಿಮಾನದ ರಕ್ಷೆಯಲ್ಲಿ ಮತ್ತು ಸಹಕಾರದ ಬೆಂಬಲದಲ್ಲಿ ನನಗೆ ಪ್ರಿಯವಾದ ಭಾರತೀಯ ರೆಡ್‌ಕ್ರಾಸ್ ಮತ್ತು ಕರ್ನಾಟಕ ಅಂಧರ ಕ್ಷೇಮಾಭ್ಯುದಯ ಸಂಸ್ಥೆಗಳಲ್ಲೂ ನನ್ನ ಕಿಂಚಿತ್ ಸೇವೆಸಲ್ಲಿಸಲು ಅವಕಾಶವಾಗಿದೆ. ಯಾವುದೇ ಕ್ಷೇತ್ರವಿರಲಿ, ನನ್ನನ್ನು ಆತ್ಮೀಯತೆಯಿಂದ ಕಂಡು ಪ್ರೋತ್ಸಾಹಿಸುತ್ತಿರುವ ಎಲ್ಲಾ ಹಿರಿಯರನ್ನು, ಗೆಳೆಯರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನನ್ನ ಅಲ್ಪ ಸೇವೆಯನ್ನೇ ತಾವೆಲ್ಲಾ ದೊಡ್ಡದಾಗಿ ಪರಿಗಣಿಸಿ, ಇಂದು ನನಗೆ ಪ್ರೀತಿಯ ಸೇವಾ ಕೊಡುಗೆಯಾಗಿ ನೀಡಿರುವ ಮೂರು ಲಕ್ಷ ರೂಪಾಯಿ ನಿಧಿಯನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯ ಉತ್ತೇಜನಕ್ಕಾಗಿ ನೀಡಿದ್ದೀರಿ. ಇದಕ್ಕಾಗಿ ನಾನು ಕೃತಜ್ಞನಾಗಿದ್ದೇನೆ. ನನ್ನ ಸೇವಾಕ್ಷೇತ್ರವಾದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳಿಗಾಗಿ ಬಳಸಲು ಈ ನಿಧಿಯನ್ನು ನಮ್ಮ ಸಂಸ್ಥೆಯ ಅಧ್ಯಕ್ಷರಾದ ಸನ್ಮಾನ್ಯ ಮುಖ್ಯ ಮಂತ್ರಿಗಳಿಗೆ ಅರ್ಪಿಸುತ್ತೇನೆ. ದಯವಿಟ್ಟು ಸ್ವೀಕರಿಸಬೇಕೆಂದು ಮಾನ್ಯ ಮುಖ್ಯಮಂತ್ರಿಗಳಲ್ಲಿ ಪ್ರಾರ್ಥಿಸುತ್ತೇನೆ.

ನನ್ನ ಸಾರ್ವಜನಿಕ ಸೇವೆಗೆ ಸ್ಫೂರ್ತಿಯಾಗಿ, ಪೋಷಕರಾಗಿ, ಸಹಕಾರಿಗಳಾಗಿ ಇರುವ ಅನೇಕ ಹಿರಿಯರಿದ್ದಾರೆ. ಇವರುಗಳಲ್ಲಿ ದಿ। ಜೆ. ಬಿ. ಮಲ್ಲಾರಾಧ್ಯ , ದಿ।। ಡಾ।। ಎನ್. ಪಿ. ಪಾಟೇಲ್ ಮತ್ತು ದಿ।। ಜಿ. ಸಾಂಬಶಿವಯ್ಯ, ಶ್ರೀ ವೈ.ಎನ್. ಗಂಗಾಧರ ಶೆಟ್ಟಿ ಅವರುಗಳನ್ನು ನಾನು ಸ್ಮರಿಸಲೇಬೇಕು. ನಾನು ಬೆಂಗಳೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯನಾಗಿ 9 ವರ್ಷಗಳ ಕಾಲ ಇದ್ದಾಗ ಡಾ।। ಹೆಚ್. ನರಸಿಂಹಯ್ಯ, ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸ ರಾವ್, ಪ್ರೊ।। ಜಿ. ಕೆ. ನಾರಾಯಣರೆಡ್ಡಿ, ಜಿ. ನಾರಾಯಣ, ಪ್ರೊ।। ಎಂ. ಪಿ. ಎಲ್. ಶಾಸ್ತ್ರಿ, ಡಾ।। ಎನ್. ರುದ್ರಯ್ಯ, ಪ್ರೊ।। ಎಂ. ಷಡಾಕ್ಷರಸ್ವಾಮಿ, ಡಾ।। ಜಿ. ಎಸ್. ಶಿವರುದ್ರಪ್ಪ, ಪ್ರೊ।। ಜಿ. ವೆಂಕಟಸುಬ್ಬಯ್ಯ, ವಿ. ಎಸ್. ಕೃಷ್ಣ ಅಯ್ಯರ್ ಅವರಂತಹ ಹಿರಿಯರೊಡನೆ ಕೆಲಸಮಾಡುವ ಸದವಕಾಶ ಒದಗಿತ್ತು. ಅವರೆಲ್ಲಾ ಇಂದಿಗೂ ನನ್ನನ್ನು ಅಭಿಮಾನ, ಆದರಗಳಿಂದ ಕಾಣುತ್ತಾ ಬಂದಿದ್ದಾರೆ. ನನ್ನನ್ನು ಸದಾ ಪ್ರೋತ್ಸಾಹಿಸುತ್ತಾ ಬಂದಿರುವ ಬೆಂಗಳೂರು ನಗರಪಾಲಿಕೆಯ ಮಾಜಿ ಮೇಯರ್ ಅವರೂ, ಭಾರತೀಯ ರೆಡ್‌ಕ್ರಾಸ್‌ನ ಉಪಾಧ್ಯಕ್ಷರೂ ಆದ ಶ್ರೀ ಕೆ. ಎಂ. ನಂಜಪ್ಪನವರನ್ನು ನಾನು ಮರೆಯಲಾರೆ.

ಈ ಸಂದರ್ಭದಲ್ಲಿ ನಾನು ವಿಶೇಷವಾಗಿ ಸ್ಮರಿಸಬೇಕಾದವರೆಂದರೆ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಸದಾ ಚೈತನ್ಯದ ಚಿಲುಮೆಯಂತೆ ದುಡಿಯುತ್ತಿರುವ ನಾಡಿನ ಜಾನಪದ ವಿದ್ವಾಂಸರೂ, ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆದ ಶ್ರೀ ಗೊ.ರು. ಚೆನ್ನಬಸಪ್ಪನವರು. ಕಳೆದ 30 ವರ್ಷಗಳಿಂದಲೂ ಅವರು ನನಗೆ ಒಂದು ರೀತಿಯಲ್ಲಿ ಗುರುಗಳಂತೆ. ನನ್ನ ಸಮಾಜಸೇವಾಕಾರ್ಯಗಳಲ್ಲಿ ಮಾರ್ಗದರ್ಶನ ಮಾಡುತ್ತಿದ್ದಾರೆ. ನನ್ನ ಮೇಲಿನ ಅಭಿಮಾನದಿಂದ ನನ್ನ ಎಷ್ಟೋ ತಪ್ಪುಗಳೊಡನೆ ರಾಜಿ ಮಾಡಿಕೊಂಡಿದ್ದಾರೆ. ಅವರ ಪ್ರೀತಿವಿಶ್ವಾಸಕ್ಕೆ ನಾನು ಋಣಿಯಾಗಿದ್ದೇನೆ.

ಇಂದಿನ ಈ ಆತ್ಮೀಯ ಸಮಾರಂಭವು, ನನ್ನ ಬಾಳಿಗೆ ಅಪಾರ ಪ್ರೀತಿ ತೋರುತ್ತಿರುವ ಪರಮಪೂಜ್ಯ ಶ್ರೀ ತರಳಬಾಳು ಜಗದ್ಗುರು ಡಾ|| ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ಮತ್ತು ಪರಮಪೂಜ್ಯ ಶ್ರೀ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆಯುತ್ತಿರುವುದು ನನ್ನ ಪುಣ್ಯವೆಂದು ಭಾವಿಸಿದ್ದೇನೆ. ಪೂಜ್ಯದ್ವಯರ ಆಶೀರ್ವಾದ ಸದಾ ನನಗೆ ರಕ್ಷೆಯಾಗಿರಲಿ ಎಂದು ಬಿನ್ನವಿಸಿಕೊಳ್ಳುತ್ತೇನೆ.

ಬಂಧುಗಳೇ, ತಾವೆಲ್ಲಾ ನಾಡಿನ ನಾನಾ ಭಾಗಗಳಿಂದ ಆಗಮಿಸಿ ನನ್ನ ಮೇಲೆ ಪ್ರೀತಿ ವಿಶ್ವಾಸಗಳ ಮಳೆಯನ್ನೇ ಕರೆದಿದ್ದೀರಿ ಈ ಸಮಾರಂಭ ವ್ಯವಸ್ಥೆಗಾಗಿ ನನ್ನ ಅನೇಕ ಗೆಳೆಯರು, ಬಂಧುಗಳು, ಸಾಹಿತಿಗಳು, ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯ ಸಹೋದ್ಯೋಗಿಗಳು, ನಾನು ವೃತ್ತಿಸೇವೆಯಲ್ಲಿರುವ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಸಹೋದ್ಯೋಗಿಗಳು, ಉದ್ಯಮಿಗಳು, ನಾನಾ ಸಂಘಸಂಸ್ಥೆಗಳ ಮುಖ್ಯರು ದುಡಿದಿದ್ದಾರೆ. ಅವರೆಲ್ಲರನ್ನೂ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಬೆಂಗಳೂರು ನಗರ ಮತ್ತು ನಾಡಿನ ನಾನಾ ಭಾಗಗಳಿಂದ ಆಗಮಿಸಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಹೋದ್ಯೋಗಿಗಳು, ಮಿತ್ರರು, ಬಂಧುಗಳು ಮತ್ತು ಬೆಂಗಳೂರಿನ ನಾಗರಿಕರುಗಳಿಗೆ ನನ್ನ ನಮನಗಳು. ಅಭಿನಂದನಾ ಸಮಿತಿಯ ಅಧ್ಯಕ್ಷರಿಗೆ, ಉಪಾಧ್ಯಕ್ಷರುಗಳಿಗೆ, ಕಾರ್ಯದರ್ಶಿಗಳಿಗೆ, ಸದಸ್ಯರುಗಳಿಗೆ, ಹಣಕಾಸು ಸಮಿತಿ ಅಧ್ಯಕ್ಷರಾದ ಶ್ರೀ ಬಿ. ಆರ್. ವಿಶ್ವನಾಥ ಶೆಟ್ಟಿ, ಕೋಶಾಧ್ಯಕ್ಷರಾದ ಶ್ರೀ ಡಿ. ಎಲ್. ಸುರೇಶ್‌ಬಾಬು, ಸ್ಮರಣ ಸಂಚಿಕೆ ಸಮಿತಿ, ಸಂಪಾದಕ ಮಂಡಳಿ ಮತ್ತು ಸಮಿತಿಯ ಎಲ್ಲ ಸದಸ್ಯರುಗಳಿಗೂ ನಾನು ಕೃತಜ್ಞನಾಗಿದ್ದೇನೆ.

ನನ್ನ ವೈಯಕ್ತಿಕ ಸುಖ-ದುಃಖಗಳಲ್ಲಿ ಪಾಲುಗೊಂಡು ಕಳೆದ ಮೂರು ದಶಕಗಳಿಂದಲೂ ನನ್ನ ಆತ್ಮೀಯರಾಗಿ, ಬೆಂಬಲಿಗರಾಗಿ, ಮಾರ್ಗದರ್ಶಕರಾಗಿರುವ ಶ್ರೀ ಎಂ. ಮಲ್ಲಿಕಾರ್ಜುನಯ್ಯ, ಶ್ರೀ ಎ. ವಿ. ರೇಗೊ, ಪ್ರೊ|| ಎಂ. ಸೂರ್ಯನಾರಾಯಣಪ್ಪ, ಶ್ರೀ ಎನ್. ಚಂದ್ರಶೇಖರ್, ಶ್ರೀ ಜಿ. ಆರ್. ಪರಮೇಶ್ವರಪ್ಪ ಮತ್ತು ಶ್ರೀ ಡಿ. ಎಸ್. ನಾಗೇಂದ್ರಪ್ಪನವರನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಇಂದು ತಾವೆಲ್ಲಾ ತೋರಿಸಿರುವ ಅಭಿಮಾನ, ನೀಡಿದ ಗೌರವ ಇದೆಲ್ಲವೂ ನಾನು ಮುಂದೆ ನಡೆಯಬೇಕಾದ ದಾರಿಗೆ ಬೆಳಕೆಂದು ಭಾವಿಸಿದ್ದೇನೆ. ತಮ್ಮ ಆಶೀರ್ವಾದರಕ್ಷೆ ಪಡೆದು ನನ್ನ ಉಳಿದ ಜೀವಮಾನದಲ್ಲಿ ಸಾಧ್ಯವಾದಷ್ಟು ಸಾರ್ವಜನಿಕ ಸೇವೆ ಸಲ್ಲಿಸುತ್ತಾ ಹೋಗುತ್ತೇನೆಂದು ವಿನಯಪೂರ್ವಕವಾಗಿ ಅರಿಕೆಮಾಡಿಕೊಳ್ಳುತ್ತೇನೆ.

ಇನ್ನೊಂದು ಅತ್ಯಂತ ಮಹತ್ವದ ವಿಚಾರವೆಂದರೆ, ನನ್ನನ್ನು ಇಂತಹ ಅಭಿಮಾನಕ್ಕೆ ಪಾತ್ರನನ್ನಾಗಿ ಮಾಡಿದ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯ ಜನಕನಾದ ಲಾರ್ಡ್ ಬೇಡನ್ ಪೊವೆಲ್ ಅವರ ಸ್ಮರಣೆ. ಆ ವಿಶ್ವವಿಖ್ಯಾತ ಮಹಾಚೇತನವನ್ನು ನಾವೆಲ್ಲಾ ಎಷ್ಟು ಸ್ಮರಿಸಿದರೂ ಸಾಲದು.

ಇಷ್ಟೆಲ್ಲಾ ಹೇಳಿದನಂತರ ನಾನು ಋಣಿಯಾಗಿರಬೇಕಾದ ಮತ್ತೊಬ್ಬ ವ್ಯಕ್ತಿಯಿದ್ದಾರೆ. ಅವರೆಂದರೆ ನನ್ನ ಈ ಸಾರ್ವಜನಿಕ ಸೇವೆಗೆ ಎಲ್ಲಾ ವಿಧವಾದ ಸಹಕಾರ ನೀಡುತ್ತಿರುವ ನನ್ನ ಪತ್ನಿ ಶ್ರೀಮತಿ ಲೀಲಾ. ಆಕೆಯ ಸಹನಾಶಕ್ತಿ ಅದ್ಭುತವಾದುದು. ನಾನೂ ನನ್ನ ತಂದೆಯವರಂತೆ ಮನೆಯ ನಿರ್ವಹಣೆಯನ್ನೆಲ್ಲಾ ಆಕೆಗೆ ಒಪ್ಪಿಸಿದ್ದೇನೆ. ಅಂತೆಯೇ ಈ ಸಾರ್ವಜನಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ನನಗೆ ಅವಕಾಶವಾಗಿರುವುದು ನಮ್ಮದು ಸತಿಪತಿಗಳೊಂದಾದ ಧರ್ಮ.

ತಮಗೆಲ್ಲಾ ಮತ್ತೊಮ್ಮೆ ಮನಸಾರೆ ವಂದಿಸುತ್ತೇನೆ, ನಮಸ್ಕಾರ.

ದಿನಾಂಕ : 26-10-97

**ಕೆ. ಬಿ. ಷಣ್ಮುಖಪ್ಪ**